


# ಜ್ಯೋತಿಷ ಮಿತ್ರ

ಆನ್ಲೈನ್ ದಿನಪತ್ರಿಕೆ

॥ ವೇದೋಽಖಿಲೋ ಧರ್ಮಮೂಲಮ್ ॥

www.jyothishamithra.com

ಸಂಚಿಕೆ : 901 02-02-2021 ಮಂಗಳವಾರ

ಶಾರ್ವರಿಸಂವತ್ಸರ ಉತ್ತರಾಯಣ ಹೇಮಂತಋತು ಪೌಷಮಾಸ ಕೃಷ್ಣಪಕ್ಷ

## ನಿತ್ಯ ಪಂಚಾಂಗ

ತಿಥಿ : ಪಂಚಮಿ (ಗಂಟೆ 16.18ರ ವರೆಗೆ)

ನಕ್ಷತ್ರ : ಹಸ್ತಾ (ಗಂಟೆ 22.31ರ ವರೆಗೆ)

ರಾಹುಕಾಲ : (ಗಂಟೆ 03.38 PM - 05.05 PM ವರೆಗೆ)

ಗುಳಿಕಕಾಲ : (ಗಂಟೆ 12.44 PM - 02.11 PM ವರೆಗೆ)

## ಸುಜ್ಞಾನ

ಸುಖವನ್ನು ಬೆನ್ನಟ್ಟಿ ಹೋದರೆ ಅದು ನಮ್ಮಿಂದ ದೂರ ಓಡುವುದು; ಸುಖದಿಂದ ದೂರ ಓಡಿದರೆ ಅದೇ ನಮ್ಮನ್ನು ಹಿಂಬಾಲಿಸಿ ಬರುವುದು.

# ವೀರಭದ್ರಾಸನ



ವೀರಭದ್ರಾಸನ ಅಥವಾ ವೀರ ಭಂಗಿಯು ದೇಹದ ಸಮತೋಲನವನ್ನು ಹೆಚ್ಚಿಸಿ, ದಾಢ್ಯತೆಯನ್ನು ಹೆಚ್ಚಿಸುತ್ತದೆ. ಒತ್ತಡವನ್ನು ಈ ಆಸನ ನಿವಾರಿಸಿ ಮನಸ್ಸನ್ನು ಪ್ರಶಾಂತವಾಗಿಡುವುದರಿಂದ ಹೃದಯದ ಬಡಿತ ನಿಯಂತ್ರಣದಲ್ಲಿರುತ್ತದೆ.




ವಿವಾಹ ಜಾತಕ ಹೊಂದಾಣಿಕೆ ಮಾಡಿಕೊಡಲಾಗುವುದು.

ಸಂಪರ್ಕಿಸಿ : 9986671473



# ಗ್ರಹರಿಂದ ರೋಗ ಚಿಂತನೆ

ರೋಗಸ್ಥ ಚಿಂತಾಮಪಿ ರೋಗಭಾವಸ್ಥಿತ್ಯೈಗ್ರಹೈರ್ವಾ ವ್ಯಯಮೃತ್ಯು ಸಂಸ್ಥೈಃ |
ರೋಗೇಶ್ವರೇಣಾಪಿ ತದನ್ವಿತ್ಯೈರ್ವಾ ದ್ವಿ ತ್ರ್ಯಾದಿಸಂವಾದವಶಾದ್ವ ದಂತು ||

ರೋಗದ ವಿಚಾರವನ್ನು – ರೋಗ ಭಾವ (ಷಷ್ಠಭಾವ)ದಲ್ಲಿ ಸ್ಥಿತ ಗ್ರಹ, ಅಷ್ಟಮ ಹಾಗೂ ದ್ವಾದಶಭಾವದಲ್ಲಿ ಸ್ಥಿತ ಗ್ರಹ ಹಾಗೂ ಷಷ್ಠಾಧಿಪತಿ ಮತ್ತು ಷಷ್ಠಾಧಿಪತಿಯೊಡನೆ ಸಂಯುಕ್ತ ಗ್ರಹಗಳಿಂದ ಮಾಡಬೇಕು. ಎರಡು ಅಥವಾ ಮೂರು ಪ್ರಕಾರದಿಂದ ಒಂದು ವೇಳೆ ಒಂದೇ ರೋಗ ನಿರ್ದಿಷ್ಟ (ಖಚಿತ) ಇದ್ದರೆ, ಆ ರೊಗವನ್ನು ಹೇಳಬೇಕು.

## ಸೂರ್ಯ ದೋಷದಿಂದ ಉತ್ಪನ್ನ ರೋಗಗಳು :

ಪಿತ್ತ ಪ್ರಕೃತಿ, ತೀವ್ರ ಜ್ವರ, ಶರೀರದಲ್ಲಿ ಉರಿತ, ಅಪಸ್ಮಾರ, ಹೃದಯರೋಗ, ನೇತ್ರಪೀಡೆ, ಶತ್ರುಭಯ, ಚರ್ಮರೋಗ, ಮೂಳೆಯ ಕ್ಷಯ, ಅಗ್ನಿ, ಶಸ್ತ್ರ ಹಾಗೂ ವಿಷದಿಂದ ಆಘಾತ, ಪುತ್ರ - ಸ್ತ್ರೀಯಿಂದ ಕಷ್ಟಗಳು, ಪಶುಗಳು, ಚೋರ ಹಾಗೂ ಸರ್ಪದಿಂದ ಭಯ ಹಾಗೂ ರಾಜ, ಧರ್ಮರಾಜ (ಯಮ) ಮತ್ತು ರುದ್ರನ ಕೋಪದಿಂದ ಭಯ, ಮುಂತಾದವುಗಳ ಸೂರ್ಯದೋಷದಿಂದ ಉಂಟಾಗುತ್ತದೆ.

## ಚಂದ್ರ ದೋಷದಿಂದ ಉತ್ಪನ್ನ ರೋಗಗಳು :

ಅತಿನಿದ್ರೆ ಅಥವಾ ನಿದ್ರೆಯ ಅಭಾವ, ಆಲಸ್ಯ, ಕಫವಿಕೃತಿ, ಅತಿಸಾರ(ಭೇದಿ), ಕುರು - ಹುಣ್ಣು, ಶೀತಜ್ವರ, ಕೊಂಬಿರುವ ಪಶು ಅಥವಾ ಜಲಚರಗಳಿಂದ ಭಯ, ಸ್ತ್ರೀ ಜನ್ಯರೋಗ, ಕಾಮಾಲೆ, ಮಾನಸಿಕ ಆಶಾಂತಿ, ರಕ್ತವಿಕಾರ, ಜಲದಿಂದ ಭಯ, ಬಾಲಗ್ರಹ,

ದುರ್ಗಾ, ಕಿನ್ನರ, ಯಮ, ಸರ್ಪ ಹಾಗೂ ಯಕ್ಷಿಣಿ ಮೊದಲಾದವರ ಕೋಪದಿಂದ ಭಯ ಇತ್ಯಾದಿ. ಚಂದ್ರನು ದೂಷಿತನಾಗುವುದರಿಂದ ಉಂಟಾಗುತ್ತವೆ.


ಡಿಜಿಟಲ್ ಜ್ಯೋತಿಷ ಕ್ಲಾಸ್ ಈಗ ಕನ್ನಡದಲ್ಲಿ....

ಜ್ಯೋತಿಷ ಶಾಸ್ತ್ರವನ್ನು ನೀವಿದ್ದಲ್ಲಿಯೇ ಕಲಿಯಬಹುದು...

ವೃತ್ತಿಪರ ಜ್ಯೋತಿಷ್ಯರಾಗಬಹುದು...

ಸಂಪರ್ಕಿಸಿ :

9986671473
9535283535

www.jyothishamithra.com





## ಮಂಗಳ ದೋಷದಿಂದ ಉತ್ಪನ್ನ ರೋಗಗಳು :

ಅತ್ಯಧಿಕ ದಾಹ, ರಕ್ತವಿಕಾರ, ಪಿತ್ತಜ ಜ್ವರ, ಅಗ್ನಿ – ವಿಷ ಹಾಗೂ ಶಸ್ತ್ರಾಘಾತದ ಭಯ, ಕುಷ್ಠರೋಗ, ನೇತ್ರವಿಕಾರ, ಗುಲ್ಮ (ಉದರ) ರೋಗ, ಅಪಸ್ಮಾರ, ಮಜ್ಜಾ ಸಂಬಂಧಿ ರೋಗ, ದೈಹಿಕ ರೂಕ್ಷತೆ (ಗಡಸುತನ) ಕಜ್ಜಿ-ತುರಿಕೆ, ಅಂಗವಿಕೃತಿ, ರಾಜಾ-ಶತ್ರು ಹಾಗೂ ಮಿತ್ರರಿಂದ ಪೀಡನೆ, ಸಹೋದರ, ಪುತ್ರ, ಶತ್ರು ಹಾಗೂ ಮಿತ್ರರಿಂದ ವಿವಾದ ಕಲಹ, ಗಂಧರ್ವಾದಿ ದುಷ್ಟಾತ್ಮರಿಂದ ಕಷ್ಟ ಹಾಗೂ ಶರೀರದ ಮೇಲಿನ ಭಾಗದಲ್ಲಿಯ ವಿವಿಧ ರೋಗಗಳು. ಮಂಗಳನು ದೂಷಿತನಾಗುವುದರಿಂದ ಉಂಟಾಗುತ್ತವೆ.

## ಬುಧ ದೋಷದಿಂದ ಉತ್ಪನ್ನ ರೋಗಗಳು :

ಮಾನಸಿಕ ಭ್ರಾಂತಿ (ವಿಭ್ರಮೆ), ವಾಣಿ ದೋಷ, ನೇತ್ರ-ಕಂಠ ಹಾಗೂ ನಾಸಿಕಾದಿಗಳಲ್ಲಿ ವಿಕಾರ, ಜ್ವರ, ವಾತ-ಪಿತ್ತ-ಕಫದ ವಿಕಾರ ಜನಿತರೋಗ, ವಿಷ ಸೇವನೆಯಿಂದ

ರೋಗ, ಚರ್ಮರೋಗ, ಪಾಂಡುರೋಗ, ದು:ಸ್ವಪ್ನ, ಕಜ್ಜಿ-ನವೆ, ಅಗ್ನಿಯಲ್ಲಿ ಬೀಳುವ ಭಯ, ಬಂಧನ ಹಾಗೂ ಕಠೋರ ವ್ಯವಹಾರದಿಂದ ಅಶಾಂತಿ, ಗಂಧರ್ವಾದಿ ಕುಟಿಲ ಆತ್ಮಗಳಿಂದ ಕಷ್ಟ, ಮೊದಲಾದವು ಬುಧನು ದೂಷಿತನಾಗುವುದರಿಂದ ಉಂಟಾಗುತ್ತವೆ.

ನಕ್ಷತ್ರ ರಾಶಿ, ಲಗ್ನಫಲ, ಯೋಗಗಳ ಫಲ, ವಿದ್ಯೆ, ಉದ್ಯೋಗ,
ವಿವಾಹ ಫಲ, ಏಳುವರೆ ಶನಿ ದೋಷಕ್ಕೆ ಪರಿಹಾರ, ದಶಾ,
ಅಂತರ್ದಶಾ ಫಲ, ಗೋಚಾರ ಫಲ
ಶಾಸ್ತ್ರಸಿದ್ಧ ಸಂಪೂರ್ಣ ಜಾತಕ
(Up to 95 pages • PDF Copy)
ರೂ.250/- ಮಾತ್ರ
Jyothisha Mithra
ಸಂಪರ್ಕಿಸಿ : 998 667 1473
www.jyothishamithra.com

## ಗುರು ದೋಷದಿಂದ ಉತ್ಪನ್ನ ರೋಗಗಳು :

ಗುಲ್ಮ(ಉದರ) ರೋಗ, ಕರುಳಿನ ವಿಕೃತಿ ಜನ್ಯಜ್ವರ,

ಶೋಕಜನ್ಯ ರೋಗಗಳು, ಮೂರ್ಛೆ (ಈ ಎಲ್ಲಾ ರೋಗಗಳು ಕಫದ ಅಸಮತೋಲನದಿಂದ ಉಂಟಾಗುತ್ತವೆ) ಕರ್ಣವಿಕಾರ, ಮೋಹಗ್ರಸ್ತತೆ, ದೇವಸ್ಥಾನ ಸಂಬಂಧಿ ವಿವಾದಿಂದ ಕಷ್ಟ, ಬ್ರಾಹ್ಮಣ ಶಾಪದಿಂದ ಕಷ್ಟ, ಯಕ್ಷ-ಕಿನ್ನರ ಪೀಡನೆ, ವಿದ್ವಾಂಸರು ಹಾಗೂ ಗುರು ಹಿರಿಯರ ಶಾಪದಿಂದ ಕಷ್ಟ. ಇವೆಲ್ಲವೂ ಗುರು ದೂಷಿತನಾಗುವುದರಿಂದ ಜಾತಕನಿಗೆ ಪ್ರಾಪ್ತಿಯಾಗುತ್ತವೆ.

**ಶುಕ್ರ ದೋಷದಿಂದ ಉತ್ಪನ್ನ ರೋಗಗಳು :**

ಪಾಂಡುರೋಗ, ವಾತ-ಕಫ ವಿಕಾರ ಜನ್ಯ ವ್ಯಾಧಿಗಳು, ನೇತ್ರ ವಿಕಾರ, ಮೂತ್ರ ವಿಕಾರ, ಪ್ರಮೇಹ, ಜನನೇಂದ್ರಿಯ ಸಂಬಂಧಿ ವಿಕಾರ, ಮೈಥುನದಲ್ಲಿ ಅಸಮರ್ಥತೆ, ವೀರ್ಯಸ್ರಾವ ಅಥವಾ ಶ್ರೀಘ್ರಪತನ, ಅಧಿಕ ಮೈಥುನದಿಂದ ಶಾರೀರಿಕ ಕಾಂತಿಹೀನತೆ, ಕ್ಷಯ,

ಯೋಗಿನಿ - ಯಕ್ಷಿಣಿ ಮುಂತಾದವರಿಂದ ಪೀಡನೆ ಹಾಗೂ ಪರಮ ಪ್ರಿಯ ಮಿತ್ರನಿಂದ ಮೈತ್ರಿಭಂಗ ಮೊದಲಾದವು ಶುಕ್ರನು ದೂಷಿತನಾಗುವುದರಿಂದ ಜಾತಕನಿಗೆ ಪ್ರಾಪ್ತಿಯಾಗುತ್ತವೆ.

## ಶನಿ ದೋಷದಿಂದ ಉತ್ಪನ್ನ ರೋಗಗಳು :

ವಾತ-ಕಫ ವಿಕಾರ ಜನ್ಯ ರೋಗಗಳು, ಪಾದವೈಕಲ್ಯ (ಪಾರ್ಶ್ವವಾಯು ಅಥವಾ ಪೆಟ್ಟು ಬೀಳುವುದರಿಂದ), ಆಪತ್ತು, ದಣಿವು, ಮಂಪರು, ಭ್ರಾಂತಿ, ಉದರರೋಗ, ಅಂತ:ಶೂಲೆ (ಮಾರ್ಮಿಕ ಆಘಾತ ಅಥವಾ ಹೃದಯ ಶೂಲೆ), ಸೇವಕರ ವಿನಾಶ, ಪಕ್ಕೆಗಳಲ್ಲಿ ಕಷ್ಟ ಸ್ತ್ರೀ-ಪುತ್ರಾದಿಗಳಿಂದ ಕಷ್ಟ, ಅಂಗವೈಕಲ್ಯ (ಅಂಗ-ಭಂಗವಾಗುವುದು), ಮಾರ್ಮಿಕ ವೇದನೆ, ಪಿಶಾಚಾದಿಗಳಿಂದ ಪೀಡನೆ - ಮುಂತಾದವು ಶನಿಯ ದೋಷದಿಂದ ಜಾತಕನಿಗೆ ಪ್ರಾಪ್ತಿಯಾಗುತ್ತವೆ.

## ರಾಹು – ಕೇತು ಹಾಗೂ ಮಾಂದಿ ದೋಷದಿಂದ ಉತ್ಪನ್ನ ರೋಗಗಳು :

ರಾಹುವಿನ ವಿಕಾರದಿಂದ – ಕುಷ್ಠ, ಕ್ಯಾನ್ಸರ್, ಬೌದ್ಧಿಕ ವಿಭ್ರಮೆ (ವಿವೇಕ ಶೂನ್ಯತೆ), ವಿಷಜನ್ಯ ವ್ಯಾಧಿ, ಪಾದಗಳಲ್ಲಿ ರೋಗ, ಸ್ತ್ರೀ-ಪುತ್ರಾದಿಗಳಿಗೆ ಕಷ್ಟ ಹಾಗೂ ಪ್ರೇತ ಪಿಶಾಚಿಗಳಿಂದ ಭಯವಾಗುತ್ತದೆ.

ಕೇತುವಿನ ವಿಕಾರದಿಂದ - ಕ್ಯಾನ್ಸರ್, ಬ್ರಾಹ್ಮಣ ಹಾಗೂ ಕ್ಷತ್ರಿಯರ ವಿರೋಧದಿಂದ ಕಷ್ಟ, ವಾಮಾಚಾರ ಪ್ರಯೋಗದಿಂದಾಗಿ ಕಷ್ಟ ಅನುಭವಿಸಬೇಕಾಗುತ್ತದೆ

ಗುಳಿಕನ ಪ್ರಕೋಪದಿಂದ - ಪ್ರೇತ ಭಾದೆ, ಕ್ಯಾನ್ಸರ್, ಕಾರಣವಿಲ್ಲದೆ ಭಯ, ವಿಷಪ್ರಯೋಗ, ವಿಪರೀತ ಮಾದಕ ವಸ್ತುಗಳ ಸೇವನೆಯಿಂದ ರೋಗ ಉಂಟಾಗುತ್ತದೆ

ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ
ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com